ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ಸೋಮವಾರ, ದಿನಾಂಕ: 09ನೇ ಮಾರ್ಚ್, 2020

ಶಿಕ್ಷಕರ/ಉಪನ್ಯಾಸಕರ ಎಕ್ಸ್‌ಗ್ರೇಷಿಯಾ ಬಗ್ಗೆ

ಶ್ರೀ ಅರುಣ ಶಹಾಪುರ (ಶಿಕ್ಷಕರ ಕ್ಷೇತ್ರ)

378 (534) ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಮತ್ತು ಸಕಾಲ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಈ ಹಿಂದೆ ಶಿಕ್ಷಕರ ವೇತನ ತಾರತಮ್ಯ ಸರಿಪಡಿಸಲು (ಪ್ರೌಢ ಶಾಲಾ ಹಾಗೂ ಪದವಿ ಪೂರ್ವ ಶಿಕ್ಷಕರು, ಮುಖ್ಯ ಗುರುಗಳು,ಪ್ರಾಚಾರ್ಯರು, ಉಪನ್ಯಾಸಕರು) ಎಕ್‌ಸ್‌ಗ್ರೇಷಿಯಾವನ್ನು ಒಂದು ಇಂಕ್ರಿಮೆಂಟ್ ಆಗಿ ಪರಿವರ್ತಿಸಿ ಮೂಲ ವೇತನದಲ್ಲಿ ಸೇರಿಸಲು 06ನೇ ವೇತನ ಆಯೋಗ ಶಿಫಾರಸ್ಸು ಮಾಡಿರುವುದೇ ;

(ಆ) ಈ ಎಕ್‌ಸ್‌ಗ್ರೇಷಿಯಾ ಎಲ್ಲಿ ಪ್ರೌಢ ಶಾಲಾ ಶಿಕ್ಷಕರು, ಮುಖ್ಯ ಗುರುಗಳು, ಪದವಿ ಪೂರ್ವ ಉಪನ್ಯಾಸಕರು, ಪ್ರಾಚಾರ್ಯರು ಇವರುಗಳಿಗೆ ನೀಡಿರದಿದ್ದರೆ ಯಾರಿಗೆ ಯಾವ ಯಾವ ಕಾರಣಕ್ಕಾಗಿ ನೀಡಲಾಗಿಲ್ಲ ; (ಸಂಪೂರ್ಣ ವಿವರ ನೀಡುವುದು) ನೀಡಿದ್ದಲ್ಲಿ, ಈ ಹೆಚ್ಚುವರಿ ವೇತನ ಬಡ್ತಿಯನ್ನು ಮರು ಪಾವತಿಸಿಕೊಳ್ಳಲು ಆದೇಶ ಹೊರಡಿಸಲಾಗಿದೆಯೇ ; ಹೊರಡಿಸಿದ್ದರೆ, ಯಾವ ಕಾರಣಕ್ಕೆ ಹೊರಡಿಸಲಾಗಿದೆ

(ಇ) 01-08-2008 ರ ನಂತರ ನೇಮಕವಾದ ಪ್ರೌಢ ಶಾಲಾ ಶಿಕ್ಷಕರು, ಮುಖ್ಯ ಗುರುಗಳು, ಅನುದಾನಿತ ಶಿಕ್ಷಣ ಸಂಸ್ಥೆಗಳ ಶಿಕ್ಷಕರು ಹಾಗೂ ಅದನ್ನು ಇಂಕ್ರಿಮೆಂಟ್ ಆಗಿ ಮೂಲ ವೇತನದಲ್ಲಿ ಸೇರಿಸುವಲ್ಲಿ ಅನ್ಯಾಯಕ್ಕೆ ಒಳಗಾಗಿದ್ದಾರೆ ಎಂಬುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ; ಯಾವ ಕಾಲಮಿತಿಯ ಒಳಗೆ ಇವರಿಗೂ ಈ ಸೌಲಭ್ಯ ಒದಗಿಸಲಾಗುವುದು ; ಹಾಗೂ ಮರು ಪಾವತಿಸಿಕೊಳ್ಳುವ ಆದೇಶವನ್ನು ವಾಪಸ್ಸು ಪಡೆಯಲಾಗುವುದೇ? (ಸಂಪೂರ್ಣ ವಿವರ ನೀಡುವುದು)